ಡಾ|| ಶಿವಗೌಡ ಬಾ. ಪಾಟೀಲ (ಕೋಚರಿ)*

# ವಿಜಯಾದಿತ್ಯನ ಅಮ್ಮಣಗಿಯ ತಾಮ್ರಪಟದ ಬಗ್ಗೆ ಮಾಹಿತಿ

ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕು ಅಮ್ಮಣಗಿಯ ಗೌರಿಶಂಕರ ಹಿರೇಮಠ ಅವರ ಮನೆಯಲ್ಲಿ ಈ ತಾಮ್ರಪಟವಿರುತ್ತದೆ. ಸುಮಾರು ೩೦ ವರ್ಷಗಳ ಹಿಂದೆ ಈ ತಾಮ್ರಪಟದ ಜೊತೆಗೆ ಇನ್ನು ಎರಡು ತಾಮ್ರಪಟಗಳಿದ್ದವು ಎಂದು ಗೊತ್ತಾಗುತ್ತದೆ. ಆದರೆ ಈಗ ಒಂದೇ ಒಂದು ತಾಮ್ರಪಟವು ಇರುತ್ತದೆ. ಇದರ ಉದ್ದ ೯ ೧/೪ ಅಂಗುಲ. ಅಗಲ ೪ ೩/೪ ಅಂಗುಲ ವಿರುತ್ತವೆ. ಈ ಪಟದ ಎರಡೂ ಬದಿಗೆ ೯+೯ ಸಾಲುಗಳು ಇರುತ್ತವೆ. ಹಾಗೂ ನಾಲ್ಕು ಅಂಚುಗಳನ್ನು ಸ್ವಲ್ಪ ಎತ್ತರಿಸಲಾಗಿದೆ. ಆದರಲ್ಲಿ ಒಂದು ಅಂಚು ಮುರಿದಿದೆ.

ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀ ಪೃಥ್ವಿವಲ್ಲಭ. (ಚಾಲುಕ್ಯರ ೫ನೇ ಅರಸ. ಕ್ರಿ.ಶ. ೬೫೫-೬೮೦ ಎಂದು. ಕರ್ನಾಟಕ ಗತವೈಭವ ಆ. ವೆಂಕಟರಾಯ. ಪು. ೫೩) ಮಹಾರಾಜ ಪರಮೇಶ್ವರ ಭಟ್ಟಾರಕರ ಮೊಮ್ಮಗ. ಹಾಗೂ ವಿನಯಾದಿತ್ಯ ಸತ್ಯಾಶ್ರಯ ಮಹಾರಾಜರ ಮಗ ಶ್ರೀ ವಿಜಯಾದಿತ್ಯ ಸತ್ಯಾಶ್ರಯ (ಸಮಸ್ತಭುವನಾಶ್ರಯ ಆ. ವೆಂ) ಮಹಾರಾಜರು ದಾನ ಮಾಡಿದ್ದನ್ನು ಈ ಪಟದಲ್ಲಿ ಬರೆಯಲಾಗಿದೆ. ಇದರ ದಾನಿಗಳು ಪಶ್ಚಿಮ ಚಾಲುಕ್ಯ ವಂಶದ ಸುಪ್ರಸಿದ್ಧ ರಾಜರಾಗಿದ್ದಾರೆ. ಇವರು ಮೊದಲು ವಾತಾಪಿ (ಬಾದಾಮಿ) ನಗರದಲ್ಲಿ ರಾಜ್ಯವಾಳುವುದರಿಂದ ಇತಿಹಾಸ ಜಗತ್ತಿನಲ್ಲಿ ವಾತಾಪಿ ಚಾಲುಕ್ಯರೆಂದು ಹೆಸರಾಗಿದ್ದಾರೆ.

* ಬಸವನ ಬೀದಿ, ಸಂಕೇಶ್ವರ ೫೯೧ ೩೧೩.

ವಂಶಾವಳಿಯ ಅನುಸಾರವಾಗಿ ಇದು ವಿಜಯಾದಿತ್ಯ ಎರಡನೇ ಪುಲಕೇಶಿಯ ಮರಿಮೊಮ್ಮಗ ಹಾಗೂ ಮೊದಲನೇ ವಿಕ್ರಮಾದಿತ್ಯನ ಮೊಮ್ಮಗ ಆಗಿರುತ್ತಾನೆ. ಆ ಕಾಲದಲ್ಲಿ ಎರಡನೇ ಪುಲಕೇಶಿಯು ತಮ್ಮ ವಿಷ್ಣುವರ್ಧನ ಮಹಾರಾಜ ಮತ್ತು ಅವನ ಮಗ ಕುಡಿಕೊಂಡು ಪೂರ್ವ ಚಾಲುಕ್ಯ (ವೈಂಗಿ ಅಥವಾ ಆಂಧ್ರ) ರಾಜ್ಯದ ಪಾಲನೆಯನ್ನು ಮಾಡುತ್ತಿದ್ದರು.

ತಾಮ್ರಪಟದ ಮುಂದಿನ ಭಾಗವು ದೊರೆಯದೇ ಇದ್ದ ಕಾರಣ ದಾನಪತ್ರ ಪಡೆದವರ ಹೆಸರು ಹೇಳಲು ಸಾಧ್ಯವಿಲ್ಲ. ಆದರೂ ಅಮ್ಮಣಗಿಯ ಮಠದ ಚಿರಕಾಲ ಪರಂಪರೆ ಅನುಸಾರವಾಗಿ ವಿಚಾರಿಸಲು ಅದೇ ಮಠದ ಪ್ರಾಚೀನ ತಪಸ್ವಿಯಾದ ವಿದ್ವಾಂಸರಿಗೆ ಈ ದಾನಪತ್ರವನ್ನು ಕೊಡಲಾಗಿರಬೇಕು.

**ಈ ತಾಮ್ರಪಟದ ಕಾಲ**—ಚತ್ವಾರಿಂಶತ್ಯುತ್ತರ ಛಟ್‌ಛತೇಷು ಶಕ ವರ್ಷೇಶ್ವತಿತೇಷು ಶಕವರ್ಷ ೬೪೦ ಕಳೆದು ಹೋದನಂತರ ಎಂದಿರುವುದರಿಂದ ಇದು ಕ್ರಿ. ಶ. 718ಕ್ಕೆ ಸರಿ ಹೊಂದುತ್ತದೆ.

**ಲಿಪಿ**—ಇದರ ಲಿಪಿಯೂ ಕೂಡ ಇದನ್ನು ಸಮರ್ಥಿಸುತ್ತದೆ. ಕಾಲನಿರ್ಣಯಕ್ಕೆ ಅನುಸರಿಸಿ ಈ ದಾನ ಪತ್ರದ ಅಕ್ಷರಗಳು ಪ್ರಾಚೀನ ಆಂಧ್ರ, ಕರ್ನಾಟಕ ಲಿಪಿಗಳಲ್ಲಿವೆ. ಪತ್ರದ ಒಂದು ಮಗ್ಗಲು ದುಂಡಾಗಿಯೂ ಮತ್ತೊಂದು ಮಗ್ಗಲು ಸ್ವಲ್ಪ ಕೋನಾಕಾರವಾಗಿರು

ವುದರಿಂದ ಲಿಪಿಕಾರರು ಇಬ್ಬರು ಇದ್ದಂತೆ ಭಾಸವಾಗುತ್ತದೆ. ಇ. ಎ. ಹಾಗೂ ಬಹಳಷ್ಟು ಪ್ರತ್ಯಕ್ಷ ಅಕ್ಷರ ಬಂದಿವೆ. ಸ್ವರ ಮಾತ್ರೆಯಲ್ಲಿ ಎಕಾರ, ಐಕಾರ ಬಿಟ್ಟು ಎಲ್ಲ ಮಾತ್ರೆಗಳು ಬಂದರೂ ಕೂಡ. ಇ ಮತ್ತು ಈ ಮಾತ್ರೆಗಳಲ್ಲಿ ಯಾವ ತರದ ಭೇದಗಳು ಕಂಡು ಬರುವುದಿಲ್ಲ. ವ್ಯಂಜನ ಮಾತ್ರೆಗಳಲ್ಲಿ ಕೆಲವು ಸ್ಥಾನಗಳಲ್ಲಿ ಮಹಾಪ್ರಾಣದ ಬದಲಾಗಿ ಅಲ್ಪಪ್ರಾಣಗಳನ್ನೂ ಉಪಯೋಗಿಸಲಾಗಿದೆ.

## ಶಾಸನ ಪಾಠ

೧. ಧಾನ ಪ್ರವರ ತುರಂಙ್ಗ ಮೇಣ್ಯೆ ಕೇಣ್ಯೆವೋಸ್ತಾರಿತಾಸೆಷವಿಜಿಗಿ ಷೋರವ ನಿಪತಿ ತೃತಯಾಂತರಿತಾ [ಸ್ವಗುರೊ] [ ಃ ]

೨. ಶ್ರೀಯ ಮಾತ್ಮಸಾತ್ರಿ ( ತ್ರೃ ) ತ್ಯ ಪ್ರಭಾವ ಕುಲಿಶ ದಲಿತ ಪಾಂಡ್ಯ ಚೋಳ ಕೇರಳ ಕಳಬ್ರ ಪ್ರಬೃತಿ ಬೃಬ್ರದದ ಬ್ರುವಿಬ್ರಮ

೩. ಸಾನನ್ಯಾವನತ ಕಾಞ್ಚೀಪತಿ ಮಕುಟ ಚುಂಬಿ ( ಬ್ಮಿ ) ತ ಪಾದಾಂಬು ( ಬ್ಮ ಮು) ಜಸ್ಯ ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀಪೃಥು ( ಥಿ ) ಭೀ ವಲ್ಲಭ ಮಹಾರಾಜಾಧಿ

೪. ರಾಜ ಪರಮೇಶ್ವರ ಭಟ್ಟಾರಕ ಪ್ರೀಯಸೊನೋ [ ಃ ] ಪಿತುರಾಜ್ಞಯಾ ಬಾಲೆಂದು ಶೇಕ (ಖ)

೫. ರಸ್ಯತಾರತಾರಾತಿರವ ದೈತ್ಯಬಲಮತಿ ಸಮುದ್ಧತತ್ರೈರಾಜ ಕಾಂಚೀಪತಿ ಬಲವಷ್ಮಭ್ಯ ಕರದೀ

೬. ಕೃ ( ಕೃ ) ತಕವೇರ ಪಾರಸಿಕ ಸಿಂಹಲಾಧಿದ್ವೀಪಾದಿಪಸ್ಯ ಸಕಲೋತ್ತರಾ ಪಥನಾಥ ಮಥನೋಪಾರ್ಜಿ.

೭. ತೋರ್ಜಿತ ಪಾಳಿಧ್ವಜಾದಿ ಸಮಸ್ತಪಾರವೈಶ್ವರ್ಯ ಚಿನ್ಹಸ್ಯ ವಿನಯಾದಿತ್ಯ ಸತ್ಯಾಶ್ರಯ ಶ್ರೀಪೃಥಿ

೮. ವಿ ವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟ್ಟಾರಕಸ್ಯ ಪ್ರಿಯಾತ್ಮಜ ಶೈಶವ ಏವಾಧಿ

೯. ಗತಾಶೆ ಪಾಸ್ತ್ರ ಶಾಸ್ತ್ರ ( ಸ್ತ್ರೈ ) ದಕ್ಷಿಣಾಶಾವಿಜಯನಿ ಪಿತಾಮಹೆ ಸಮುನ್ಮೂಲಿಖಿತ ನಿಖಿಲ ಕಣಕಟೆ ಸಂಹಿತಿರುತ್ತ

೧೦. ರಾಪಥ ವಿಜಿಗಿಷೋರ್ಗುರೋರಗ್ರತ ಏವಾವಹವ್ಯಾ ಪಾರವಾಚರನ್ನರಾತಿಗಜಘಟಾಪಾಟನವಿಶಿ

೧೧. ಯ್ಯ್ರಮಾನ (ಣ) ಕೃ (ಕೃ) ಪಾನಾಧಾರಸ್ಸ ಮಗ್ರವಿಗ್ರಹಾಗ್ರೇಸರಸ ಸಾಹಸ ರಸಿಕಃ ಪರಾಮು (ಙ್ಮ) ಖಿಕ್ರ (ಕೃ) ತಶ

೧೨. ತ್ರುಮಂಡಲ (ಲೋ) ಗಂಗಾ (ಙ್ಗಾ) ಯಮುನಾ ಪಾಳಿಧ್ವಜಪಟ (ಹ) ಡಕ್ಕಾ ಮಹಾಶಬ್ದ ಚಿನ್ಹಕ ಮಾಣಿಕ್ಯ ಮತಂಗ (ಙ್ಗ) ಜಾದಿಸ್ಪಿತ್ಯ [ ಸಾ ]

೧೩. ತ್ಕುರ್ವಪ(ನ್ಪ) ರೈಃ ಪಲಾಯಮಾ ನೈಯರಾಸಾಧ್ಯ ಕಥಮಪಿ ವಿಧಿವಶಾದ ಪನೀತೋಪಿ ಪ್ರತಾಪಾದೇವಾ ವಿಷಯ ಪ್ರಕೋಪ

೧೪. ಮರಾಜಕಮುತ್ಸಾರಯನ್ಸ್ವತ್ಸರಾಜ ಇವಾನಪ (ಪಿ) ಕ್ಷಿತ ಪರಸಹಾಯಕತ (ಸ್ತ) ದವಗ್ರಹಾನಿ (ನ್ನಿ) ಗ್ರತ್ಯ ಸ್ವಭುಜಾ ವಷ್ಮಭ (ಷ್ಟ)

೧೫. ಪ್ರಸಾಧಿತಾಶೇಷ ವಿಶ್ವಮ್ಬರ [ ಃ ] ಪ್ರಭುರಕ (ಖ) ಣಿಡತಶಕ್ತಿತ್ರಯತ್ವ (ತ್ವಾಥ (ಚ್ಛ) ತ್ರುಮದ ಭಙ್ಞನತ್ವಾ ದುದಾರತ್ವಾ

೧೬. ನ್ನಿರವನದ್ಯತ್ವಾ ದ್ಯಸ್ಸಮಸ್ತಭುವನಾಶ್ರಯಃ ಸಕಲಪಾರವೈಶ್ವರ್ಯ ವ್ಯಕ್ತಿಹೇತು ಪಾಳಿಧ್ವಜಾತ್ಯುಜ್ವಲ ಪ್ರಾಜ್ಯ

೧೭. ರಾಜ್ಯ ವಿಜಯಾದಿತ್ಯ ಸತ್ಯಾಶ್ರಯ ಶ್ರೀ ಪೃಥಿವಿ ವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟ್ಟಾರಕಸ್ಸರ್ವ

೧೮. ನೇವ ಮಾಜ್ಞಾಪಯತಿ ವಿದಿತ ವಸ್ತುವೋ( S ) ಸ್ಮಾಭಿತ (ಶ್ವತ್ವಾಂ) [ - ] ಶತ್ಯುತ್ತರ ಪಟ್‌ಛತೇಸು ಶಕವರ್ಷೆಷ್ವ ತಿ–ತೇಷು

**ಸಾರಾಂಶ-**

ಚಿತ್ರಕಂಠವೆಂಬ ಒಂದು ಅಶ್ವದಿಂದ ಅನೇಕ ವೀರರನ್ನು ಹೊಡೆದಟ್ಟಿ ನೂರು ರಾಜ್ಯಗಳಿಂದ ಸಂಪಾದಿಸಿದ ತನ್ನ ತಂದೆಯ ಲಕ್ಷ್ಮಿಯನ್ನು ತನ್ನ ವಶಪಡಿಸಿಕೊಂಡು ತನ್ನ ಪರಾಕ್ರಮದ ವಜ್ರಾಯುಧದಿಂದ ಪಾಂಡ್ಯ,

ಚೋಳ, ಕೇರಳ ಕಳಬ್ರ ದೇಶಗಳ ನೃಪತಿಗಳಂತಹ ಪರ್ವತಗಳನ್ನು ಸೀಳಿ ಯಾವ ರಾಜರಿಗೂ ಬಾಗದಂಥ ಕಾಂಚಿನರೇಶನಿಂದ ಪೂಜಿಸಲ್ಪಟ್ಟ ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀ ಪೃಥ್ವಿವಲ್ಲಭ ಮಹಾರಾಜ ಪರಮೇಶ್ವರನ ಮೊಮ್ಮಗನು. ಶಿವನ ಆಜ್ಞೆಯಿಂದ ಕುಮಾರ ಷಣ್ಮುಖನು ಯಾವ ರೀತಿ ರಾಕ್ಷಸ ಸೈನ್ಯವನ್ನು ವಿಧ್ವಂಸ ಪಡಿಸಿದನೋ ಅದೇ ರೀತಿ ತನ್ನ ತಂದೆಯ ಆಜ್ಞೆಯಂತೆ ಅತೀ ಅದ್ಭುತವಾದಂತಹ ಕಾಂಚೀ ರಾಜ್ಯನ ಸೈನ್ಯವನ್ನು ಕಟ್ಟಿಹಾಕಿ ಕವೇರ ಪಾರ್ಸಿಕ ಸಿಂಹಳಾದಿ ದ್ವೀಪಾದಿಸೆಗಳನ್ನು (ಕರದಾತಾ ಎಂದು) ಕೊಡುಗೈ ದೊರೆಗಳೆಂದು ಮಾಡಿ ಉತ್ತರ ಖಂಡದ ರಾಜರುಗಳನ್ನು ಸೋಲಿಸಿ ಪಾಳೀ ಧ್ವಜಾದಿ ನಿಖಿಳ ಪಾರ್ಮೆಶ್ವರಿಯ ಚಿನ್ಹೆಗಳನ್ನು ಪಡೆದಂತಹ ಶ್ರೀ ವಿನಯಾದಿತ್ಯ ಸತ್ಯಾಶ್ರಯ ಮಹಾರಾಜರ ಪುತ್ರ ಎಲ್ಲ ದನುರ್ವಿದ್ಯೆಗಳ ಅಧ್ಯಯನ ಮಾಡಿದ ದಕ್ಷಿಣ ದೇಸದ ವಿಜಯಕ್ಕಾಗಿ ಅಜ್ಜನು ಹೋದ ಮೇಲೆ ತರತಸದ ಬಾಧೆಗಳನ್ನು ದೂರು ಮಾಡಿ ಉತ್ತರ ದೇಶದ ವಿಜಯಕ್ಕೆ ಹೋದಂತಹ ತನ್ನ ತಂದೆಯ ಎದುರಿಗೆ ಯುದ್ಧ ಕಾರ್ಯವನ್ನು ನೀಗಿಸುತ್ತ ಶತ್ರು ರಾಜರುಗಳ ಕುಂಭ ಬೇಧನ ಮಾಡುವಾಗ ಖಡ್ಗದ ಹರಿತು ಹರಿದು ಹೋದರೂ ಕೂಡ ಯುದ್ಧದ ಕೊನೆಯವರೆಗೆ ಎಲ್ಲಕ್ಕೂ ಮೇಲಾಗಿ ಉಳಿಯುವದರಿಂದ ಸದ್ಧೈರ್ಯ ರಶಿಕ ಗಂಗಾ ಯಮುನಾ ಪಾಳಿಧ್ವಜಾದಿ ಚಿನ್ಹದಿಂದ ಅಲಂಕರಿಸಿದ ಮಾಣಿಕ್ಯಗಜಗಳನ್ನು ತನ್ನ ತಂದೆಗೆ ಒಪ್ಪಿಸುತ್ತ ದುರ್ದೈವದಿಂದ ಶತ್ರುಗಳ ಕೈವಶವಾದರೂ ಕೂಡ ತನ್ನ ಸ್ವಪರಾಕ್ರಮದಿಂದ ಇನ್ನಿತರ ಸಹಾಯ ಪಡೆಯದೇ ವತ್ಸ ರಾಜನಂತೆ ಶತ್ರು ಬಂಧನದಿಂದ ಹೊರಬಿದ್ದು ತನ್ನ ಸ್ವಭುಜದ ಬಲದಿಂದ ಈ ವಿಶ್ವವನ್ನೆ ವಶಪಡಿಸತಕ್ಕಂತಹ ಮತ್ತು ಪ್ರಭು ಮಂತ್ರೋತ್ಸಾಹ ನಾಮಶಕ್ತಿತ್ರಯಗಳನ್ನು ಸಂಪಾದಿಸಿ ಶತ್ರುಗರ್ವಹರಣ ಮಾಡಿ ಉದಾರತೆಯಿಂದ ನಿರ್ಮಲತೆಯಿಂದ ಸಮಸ್ತ ಜಗದಾಧಾರ ಮತ್ತು ನಿಖಿಲ ಪಾರ್ಮೆಶ್ವರ್ಯದ ಕಾರಣ ಪಾಳಿ ಧ್ವಜದಿಂದ ಉಜ್ವಲ ಸಾಮ್ರಾಜ್ಯದ ಮೇಲೆ ವಿರಾಜಮಾನನಾಗಿ ವಿಜಯಾದಿತ್ಯ ಸತ್ಯಾಶ್ರಯ ಮಹಾರಾಜರು ಎಲ್ಲ ಪ್ರಜೆಗೆ ಆಜ್ಞೆ ಮಾಡುತ್ತ ಈಗ ಶಕವರ್ಷದ ೬೪೦ ಕಳೆದುಹೋದಾಗ. ತಾಮ್ರಪಟಗಳ ಪಾಠ ಇಲ್ಲಿಗೆ ನಿಲ್ಲುತ್ತದೆ. ಈ ಶಾಸನದ ಉಳಿದ ಭಾಗ ಸಿಕ್ಕರೆ ವಿಕ್ರಮಾದಿತ್ಯನ ಶೌರ್ಯದ ಬಗ್ಗೆ ಇನ್ನೂ ಹೆಚ್ಚಿನ ಬೆಳಕು ಬೀಳುತ್ತದೆ.

## ಆಧಾರ ಗ್ರಂಥ


1. ಶ್ರೀ ವೀರಭದ್ರಶರ್ಮಾ ತೈಲಂಗ (ವೇದಕಾವ್ಯತೀರ್ಥ ಸಾಹಿತ್ಯ ವಿಶಾರದ) ಕಾಶಿ. ಭಾರತೀಯ ಅನುಶೀಲನ ಗ್ರಂಥ.
2. ಆಲೂರು ವೆಂಕಟರಾಯ, ಕರ್ನಾಟಕ ಗತ ವೈಭವ (೧೯೧೭) ಪುಟ. ೫೩



[ಈ ಲೇಖನ ಬರೆಯಲು ಸಹಕರಿಸಿದ

ಡಾ॥ ಬಿ. ಕೆ. ಖಡಬಡಿ. ಧಾರವಾಡ, ಶ್ರೀ ಶಂಕರ ಜಾಗನೂರಿ. ಸಂಕೇಶ್ವರ, ಶ್ರೀ ಗೌರೀಶಂಕರ ಹಿರೇಮಠ ಅಮ್ಮಣಗಿ ಹಿರೇಮಠ ಪಿ. ಎಸ್. ಆಯ್ ಅಮ್ಮಣಗಿ

ಇವರಿಗೆ ಕೃತಜ್ಞತೆಗಳು]